## ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1080 (1155) |
| ಉತ್ತರಿಸುವ ದಿನಾಂಕ | 22-09-2021 |
| ಮಾನ್ಯ ಸದಸ್ಯರ ಹೆಸರು | ಶ್ರೀ ಎನ್.ರವಿಕುಮಾರ್ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಆಸ್ತಿ ನೋಂದಣಿಯಲ್ಲಿ ವಂಚನೆ ಮತ್ತು ದಾಖಲೆ ತಿರುಚುವುದನ್ನು ತಡೆಗಟ್ಟಲು ಯಾವ ಕ್ರಮಗಳನ್ನು ಸರ್ಕಾರ ಕೈಗೊಂಡಿದೆ; (ವಿವರ ನೀಡುವುದು) | ಆಸ್ತಿ ನೋಂದಣಿಯಲ್ಲಿ ವಂಚನೆ ಮತ್ತು ದಾಖಲೆ ತಿರುಚುವುದನ್ನು ತಡೆಗಟ್ಟಲು ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗಿದೆ.<br>1. ಸರ್ಕಾರದ ಸುತ್ತೋಲೆ ಸಂಖ್ಯೆ: ಕಂಇ 344 ಮುನೋಮು 2008, ದಿನಾಂಕ: 06-04-2009 ಹಾಗೂ ಸದರಿ ಸುತ್ತೋಲೆಗೆ ನೀಡಲಾದ ತಿದ್ದುಪಡಿ ಸುತ್ತೋಲೆಗಳನ್ವಯ ಸ್ವತ್ತುಗಳ ನೋಂದಣಿಗೆ ಸಂಬಂಧಿಸಿದ ದಸ್ತಾವೇಜುಗಳನ್ನು ನೋಂದಾಯಿಸುವ ಸಮಯದಲ್ಲಿ ಹಾಜರುಪಡಿಸಬೇಕಾದ ದಾಖಲೆಗಳನ್ನು ನಿಗಧಿಪಡಿಸಲಾಗಿದ್ದು, ಸದರಿ ದಾಖಲೆಗಳನ್ನು ಪಡೆದು ಉಪ ನೋಂದಣಾಧಿಕಾರಿಗಳು ದಸ್ತಾವೇಜುಗಳನ್ನು ನೋಂದಾಯಿಸುತ್ತಿದ್ದಾರೆ.<br>ಅಲ್ಲದೇ, ಸರ್ಕಾರದ ದಿನಾಂಕ:18-07-2014ರ ಸುತ್ತೋಲೆ ಸಂಖ್ಯೆ: ಕಂಇ 6 ಮುನೋಮು 2013 ರನ್ವಯ ನೋಂದಣಿ ಮತ್ತು ಮುದ್ರಾಂಕ ಇಲಾಖೆಯ "ಕಾವೇರಿ" ತಂತ್ರಾಂಶವನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯಿತ್ ರಾಜ್ ಇಲಾಖೆಯ "ಇ-ಸ್ವತ್ತು" ತಂತ್ರಾಂಶದೊಂದಿಗೆ ಸಂಯೋಜಿಸಲಾಗಿದ್ದು, ಇದರಿಂದ ಗ್ರಾಮ ಪಂಚಾಯಿತಿ ವ್ಯಾಪ್ತಿಯ ಸ್ವತ್ತುಗಳ ನೋಂದಣಿ ಸಮಯದಲ್ಲಿ ಗ್ರಾಮ ಪಂಚಾಯಿತಿ ವ್ಯಾಪ್ತಿಯ ಸ್ವತ್ತುಗಳಿಗೆ ಇರುವ ಇ-ಸ್ವತ್ತು ತಂತ್ರಾಂಶದಿಂದ ಸ್ವತ್ತಿನ ಮಾಹಿತಿಯನ್ನು ಪಡೆದು ದಸ್ತಾವೇಜುಗಳನ್ನು ನೋಂದಾಯಿಸಲಾಗುತ್ತಿದೆ.<br>2. ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಕಾವೇರಿ ತಂತ್ರಾಂಶವನ್ನು ಭೂಮಿ ತಂತ್ರಾಂಶದೊಂದಿಗೆ ಮತ್ತು ಮೋಜಿಣಿ ತಂತ್ರಾಂಶದೊಂದಿಗೆ ಸಂಯೋಜಿಸಲಾಗಿದ್ದು, ಕೃಷಿ ಜಮೀನಿನ ಮಾಹಿತಿಯನ್ನು ಮತ್ತು 11-ಇ ನಕ್ಷೆಯ ಮಾಹಿತಿಯನ್ನು ಪಡೆಯಲಾಗುತ್ತಿದೆ.<br>ಅಲ್ಲದೇ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಸ್ವತ್ತುಗಳಿಗೆ ಸಂಬಂಧಿಸಿದ ಇ-ಆಸ್ತಿ ತಂತ್ರಾಂಶವನ್ನು ಪ್ರಾಯೋಗಿಕವಾಗಿ ಶಾಂತಿನಗರ ಉಪವಿಭಾಗ ವ್ಯಾಪ್ತಿಯಲ್ಲಿ ಬರುವ ಮೂರು ವಾರ್ಡ್‌ಗಳಿಗೆ ಸಂಯೋಜಿಸಲಾಗಿದೆ ಮತ್ತು ನಗರಾಭಿವೃದ್ಧಿ ಇಲಾಖೆಯ ಇ-ಆಸ್ತಿ ತಂತ್ರಾಂಶವನ್ನು ಪ್ರಾಯೋಗಿಕವಾಗಿ ರಾಮನಗರ ಮತ್ತು ಕನಕಪುರ ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ಸಂಯೋಜಿಸಲಾಗಿದೆ.<br>3. 2004ರ ನಂತರ ಗಣಕೀಕರಣದಲ್ಲಿ ನೋಂದಣಿಯಾದ ದಸ್ತಾವೇಜುಗಳ ಧೃಡೀಕೃತ ಪ್ರತಿಗಳನ್ನು (Certified Copies) ಕಾವೇರಿ ಆನ್‌ಲೈನ್ |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| | | ಸೇವೆಗಳ ಮೂಲಕ ಕಡ್ಡಾಯವಾಗಿ ಆನ್‌ಲೈನ್‌ನಲ್ಲಿ ಅರ್ಜಿ ಸಲ್ಲಿಸಿ, ದೃಢೀಕೃತ ಪ್ರತಿಗಳನ್ನು ಆನ್‌ಲೈನ್ ಮೂಲಕವೇ ಪಡೆದುಕೊಳ್ಳಬಹುದಾಗಿದೆ.<br>4. ದಸ್ತಾವೇಜುಗಳ ನೋಂದಣಿಗೆ ಭರಿಸಬೇಕಾಗಿರುವ ಶುಲ್ಕಗಳನ್ನು ಕಡ್ಡಾಯವಾಗಿ ಖಜಾನೆ-2 ಚಲನ್‌ಗಳ ಮೂಲಕ ಭರಿಸಲು ಆದೇಶಿಸಲಾಗಿದೆ.<br>5. ದಸ್ತಾವೇಜುಗಳ ನೋಂದಣಿ ವೇಳೆ ನೋಂದಣಿ ಕಾಯ್ದೆ 1908ರ ಕಲಂ 82ರಲ್ಲಿ ಉಲ್ಲೇಖಿಸಿದ ಅಪರಾಧಗಳಾದ ಸುಳ್ಳು ಹೇಳಿಕೆಗಳನ್ನು ಕೊಟ್ಟಿದ್ದಕ್ಕಾಗಿ (False Statement) ಅಥವಾ ಭಾಷಾಂತರಗಳನ್ನು ವಶಾವಣೆ ಮಾಡಿದ್ದಕ್ಕಾಗಿ (Delivering False copies or Translations), ಪುರುಷಾಂತರ ಮಾಡಿದ್ದಕ್ಕಾಗಿ (False personation) ಮತ್ತು ದುಷ್ಪ್ರೇರಣೆ (Abetment) ಒಳಗೊಂಡಿರುವ ಪ್ರಕರಣಗಳು ಕಂಡುಬಂದಲ್ಲಿ ಸದರಿ ಕಾಯ್ದೆಯ ಕಲಂ 83 ರನ್ವಯ ಸಂಬಂಧಪಟ್ಟವರ ವಿರುದ್ಧ ಕ್ರಿಮಿನಲ್ ಮೊಕದ್ದಮೆಯನ್ನು ದಾಖಲಿಸಲಾಗುತ್ತದೆ.<br>6. ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಸ್ವತ್ತುಗಳಿಗೆ ಸಂಬಂಧಿಸಿದ ಇ-ಆಸ್ತಿ ತಂತ್ರಾಂಶವನ್ನು ಪ್ರಾಯೋಗಿಕವಾಗಿ ಶಾಂತಿನಗರ ಉಪವಿಭಾಗ ವ್ಯಾಪ್ತಿಯಲ್ಲಿ ಬರುವ ಮೂರು ವಾರ್ಡ್‌ಗಳಿಗೆ ಸಂಯೋಜಿಸಲಾಗಿದೆ ಮತ್ತು ನಗರಾಭಿವೃದ್ಧಿ ಇಲಾಖೆಯ ಇ-ಆಸ್ತಿ ತಂತ್ರಾಂಶವನ್ನು ಪ್ರಾಯೋಗಿಕವಾಗಿ ರಾಮನಗರ ಮತ್ತು ಕನಕಪುರ ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ಸಂಯೋಜಿಸಲಾಗಿದೆ. |
| ಆ) | ಬ್ಲಾಕ್ ಚೈನ್ ತಂತ್ರಜ್ಞಾನವನ್ನು ಬಳಸಿ ಆಸ್ತಿ ನೋಂದಣಿ ಮಾಡುವ ಯೋಜನೆಯನ್ನು ಯಾವ ಯಾವ ಉಪ ನೋಂದಣಾಧಿಕಾರಿಗಳ ಕಛೇರಿಯಲ್ಲಿ ಜಾರಿಗೊಳಿಸಲಾಗಿದೆ. ಸದರಿ ಯೋಜನೆಯನ್ನು ರಾಜ್ಯಾದ್ಯಂತ ಜಾರಿಗೊಳಿಸುವ ಕುರಿತು ಸರ್ಕಾರದ ನಿಲುವೇನು; | ಬ್ಲಾಕ್ ಚೈನ್ ಆಧಾರಿತ ನೋಂದಣಿ ವ್ಯವಸ್ಥೆಯನ್ನು ತುಮಕೂರು ಜಿಲ್ಲೆಯ ಗುಬ್ಬಿ ಉಪನೋಂದಣಿ ಕಛೇರಿಯಲ್ಲಿ ಹಾಗೂ ದಾವಣಗೆರೆ ಜಿಲ್ಲೆಯ ಜಗಳೂರು ಉಪನೋಂದಣಿ ಕಛೇರಿಗಳಲ್ಲಿ ಪೈಲಟ್ ಆಧಾರದ ಮೇಲೆ ಜಾರಿಗೊಳಿಸಲು ಉದ್ದೇಶಿಸಲಾಗಿದೆ. ಪೈಲಟ್ ಯೋಜನೆ ಜಾರಿಯಾದ ನಂತರ ರಾಜ್ಯಾದ್ಯಂತ ವಿಸ್ತರಿಸುವ ಬಗ್ಗೆ ನಿರ್ಧರಿಸಲಾಗುತ್ತದೆ. |
| ಇ) | ಕಳೆದ ಮೂರು ವರ್ಷಗಳಲ್ಲಿ ಆಸ್ತಿ ನೋಂದಣಿಯಲ್ಲಿ ವಂಚನೆ ಮತ್ತು ದಾಖಲೆ ತಿರುಚಿರುವ ಎಷ್ಟು ಪ್ರಕರಣಗಳು ಸರ್ಕಾರದ ಗಮನಕ್ಕೆ ಬಂದಿವೆ; ಈ ಸಂಬಂಧ ಎಷ್ಟು ಉಪ ನೋಂದಣಾಧಿಕಾರಿಗಳ ಮೇಲೆ ಕ್ರಮ ಕೈಗೊಳ್ಳಲಾಗಿದೆ? (ಜಿಲ್ಲಾವಾರು ವಿವರ ನೀಡುವುದು) | ಬಂದಿದೆ.<br>ಮಾಹಿತಿಯನ್ನು ಅನುಬಂಧದಲ್ಲಿ ಸಲ್ಲಿಸಲಾಗಿದೆ. |

ಸಂಖ್ಯೆ: ಕಂಇ/415/ಎಂಎಸ್‌ಎಸ್‌ಎ/2021

(ಆರ್.ಅಶೋಕ್)
ಕಂದಾಯ ಸಚಿವರು

# ಅನುಬಂಧ

ಕಳೆದ ಮೂರು ವರ್ಷಗಳಲ್ಲಿ ಆಸ್ತಿ ನೋಂದಣಿಯಲ್ಲಿ ವಂಚನೆ ಮತ್ತು ದಾಖಲೆ ತಿರುಚುವ ಎಷ್ಟು ಪ್ರಕರಣಗಳು ಸರ್ಕಾರದ ಗಮನಕ್ಕೆ ಬಂದಿದೆ; ಈ ಸಂಬಂಧ ಎಷ್ಟು ಉಪ ನೋಂದಣಾಧಿಕಾರಿಗಳ ಮೇಲೆ ಕ್ರಮ ಕೈಗೊಳ್ಳಲಾಗಿದೆ? (ಜಿಲ್ಲಾವಾರು ವಿವರ ನೀಡುವುದು)

1. ಆಸ್ತಿ ನೋಂದಣಿಯಲ್ಲಿ ವಂಚನೆ ನಡೆದಿರುವ ಪ್ರಕರಣದ ವಿವರ:

- ಈ ಕೆಳಕಂಡಂತೆ ತಿಳಿಸಿರುವ ಎಲ್ಲಾ ಪ್ರಕರಣಗಳಿಗೆ ಸಂಬಂಧಿಸಿದಂತೆ ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಗಳನ್ನು ನೇಮಿಸಲಾಗಿದೆ
- ಕಳೆದ ಮೂರು ವರ್ಷಗಳಲ್ಲಿ ಆಸ್ತಿ ನೋಂದಣಿಯಲ್ಲಿ ವಂಚನೆ ಕುರಿತು 4 ಉಪನೋಂದಣಾಧಿಕಾರಿಗಳ ಮೇಲೆ ಕ್ರಮ ಕೈಗೊಳ್ಳಲಾಗಿದೆ.

| ಕ್ರ ಸಂ | ಸದರಿ ಪ್ರಕರಣ ನಡೆದ ಜಿಲ್ಲಾ ವ್ಯಾಪ್ತಿ | ಉಪನೋಂದಣಾಧಿಕಾರಿಗಳು /ನೌಕರರ ಹೆಸರು | ಪ್ರಕರಣ ನಡೆದ ಕಛೇರಿ ಹೆಸರು | ಹಾಲಿ ಕಾರ್ಯನಿರ್ವಹಿಸುತ್ತಿರುವ ಕಛೇರಿ ಹೆಸರು | ಪ್ರಕರಣದ ವಿವರ |
|---|---|---|---|---|---|
| 1 | 2 | 3 | 4 | 5 | 6 |
| 1 | ಜಿಲ್ಲಾ ನೋಂದಣಿ ಕಛೇರಿ ಗಾಂಧಿನಗರ | ಶ್ರೀಮತಿ ಆರ್.ಪ್ರಭಾವತಿ ಹಿರಿಯ ಉಪನೋಂದಣಾಧಿಕಾರಿ | ಉಪನೋಂದಣಿ ಕಛೇರಿ, ಯಲಹಂಕ | ಉಪನೋಂದಣಿ ಕಛೇರಿ, ಜೆ.ಪಿ.ನಗರ | ಸದರಿಯವರು ಯಲಹಂಕ ಉಪನೋಂದಣಿ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ತಿರುವನಹಳ್ಳಿ ಗ್ರಾಮದ, ಯಲಹಂಕ ಹೋಬಳಿಯ, ಬೆಂಗಳೂರು ಉತ್ತರ ತಾಲ್ಲೂಕಿನ ಸರ್ವೆ ನಂ.91/2ರ 4 ಎಕರೆ ಜಮೀನಿನ ಸ್ವತ್ತು ದಿನಾಂಕ:24-07-2013 ರಲ್ಲಿ ಜಂಟಿ ಅಭಿವೃದ್ಧಿ ಕರಾರು ಪತ್ರದೊಂದಿಗೆ ನೋಂದಣಿಯಾಗಿದ್ದ ಸಾಮಾನ್ಯ ಅಧಿಕಾರ ಪತ್ರವನ್ನು ಏಕಪಕ್ಷೀಯವಾಗಿ ದಿನಾಂಕ:03-10-2016 ರಂದು ರದ್ದಿಯಾತಿ ಅಧಿಕಾರ ಪತ್ರ (Cancellation of power of Attorney) ಎಂದು ದಸ್ತಾವೇಜು ಸಂಖ್ಯೆ: BK/IV/207/2016-17 ರಲ್ಲಿ ನೋಂದಾಯಿಸಿರುತ್ತಾರೆ.<br>1) ಈ ಸಂಬಂಧ ಸದರಿಯವರಿಗೆ ದಿನಾಂಕ: 04-04-2019 ರಲ್ಲಿ ದೋಷಾರೋಪಣ ಪಟ್ಟಿ ಜಾರಿಗೊಳಿಸಲಾಗಿದೆ.<br>2) ಸದರಿ ಪ್ರಕರಣದ ಕುರಿತು ದಿನಾಂಕ:12-12-2019 ರಲ್ಲಿ ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸಲಾಗಿದೆ.<br>3) ಸದರಿ ಪ್ರಕರಣದ ಕುರಿತು ವಿಚಾರಣಾಧಿಕಾರಿಗಳು ವಿಚಾರಣೆ ನಡೆಸಿ ದಿನಾಂಕ: 15-2-2021 ಸದರಿ ಪ್ರಕರಣದಲ್ಲಿರುವ ಆರೋಪಗಳು ರುಜುವಾತಾಗಿಲ್ಲ ಎಂದು ನಿರ್ಣಯಿಸಿ ವಿಚಾರಣಾ ವರದಿ ಸಲ್ಲಿಸಿರುತ್ತಾರೆ. ಈ ಕುರಿತು ಸದರಿಯವರಿಗೆ ಎರಡನೇ ಕಾರಣ ಕೇಳುವ ನೋಟೀಸ್ ನೀಡಲಾಗಿದೆ. |

| | | | | | |
|---|---|---|---|---|---|
| | | | | | 4) ಸದರಿಯವರು ಎರಡನೇ ಕಾರಣ ಕೇಳುವ ನೋಟೀಸ್‌ಗೆ ಲಿಖಿತ ಸಮಜಾಯಿಷಿಯನ್ನು ಸಲ್ಲಿಸಿರುತ್ತಾರೆ. ಸದರಿ ಪ್ರಕರಣದ ಕುರಿತು ಮುಂದಿನ ಕ್ರಮ ಕೈಗೊಳ್ಳುವ ಹಂತದಲ್ಲಿದೆ. |
| 2 | ಜಿಲ್ಲಾ ನೋಂದಣಿ ಕಛೇರಿ, ತುಮಕೂರು | ಶ್ರೀ ರಂಗರಾಜು ಉಪನೋಂದಣಾಧಿಕಾರಿ | ಉಪನೋಂದಣಿ ಕಛೇರಿ, ಗುಬ್ಬಿ | ಉಪನೋಂದಣಿ ಕಛೇರಿ, ದೊಡ್ಡಬಳ್ಳಾಪುರ | ಸದರಿಯವರು ಗುಬ್ಬಿ ಉಪನೋಂದಣಿ ಕಛೇರಿಯಲ್ಲಿ ಉಪ ನೋಂದಣಾಧಿಕಾರಿಯಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ತುಮಕೂರು ಜಿಲ್ಲೆ ಗುಬ್ಬಿ ತಾಲ್ಲೂಕು, ಚೇಳೂರು ಹೋಬಳಿ, ಎಂ.ಎಂ.ಎ ಕಾವಲ್ ಗ್ರಾಮಕ್ಕೆ ಸೇರಿದ ಸರ್ವೆ ನಂ.168/1 ರಲ್ಲಿನ 1 ಎಕರೆ ಖುಷ್ಕಿ ಜಮೀನನ್ನು ದಿನಾಂಕ:24-04-2017 ರಂದು ದಸ್ತಾವೇಜು ಸಂಖ್ಯೆ:355/17-18 ರಲ್ಲಿ ನೋಂದಣಿ ವೇಳೆ ಸದರಿ ಸ್ವತ್ತಿನ ಪಕ್ಷಕಾರರಾದ ಶ್ರೀ ವಜ್ರಯ್ಯ ಮತ್ತು ಶ್ರೀಮತಿ ಗೌರಮ್ಮ ಇವರುಗಳು ಮರಣಹೊಂದಿದ್ದರೂ ಅವರ ಹೆಸರುಗಳಿಗೆ ನಕಲಿ ವ್ಯಕ್ತಿಗಳನ್ನು ಸೃಷ್ಟಿಸಿ ಸದರಿ ಸ್ವತ್ತಿಗೆ ಪಕ್ಷಕಾರರಾಗಿ impersonation ಮೂಲಕ ಸದರಿ ಸ್ವತ್ತನ್ನು ನೋಂದಾಯಿಸಿರುತ್ತಾರೆ.<br>1) ಈ ಸಂಬಂಧ ಸದರಿಯವರಿಗೆ ದಿನಾಂಕ:04-04-2019 ರಲ್ಲಿ ದೋಷಾರೋಪಣ ಪಟ್ಟಿ ಜಾರಿಗೊಳಿಸಲಾಗಿದೆ.<br>2) ಸದರಿ ಪ್ರಕರಣದ ಕುರಿತು ದಿನಾಂಕ: 23-08-2019 ರಲ್ಲಿ ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸಲಾಗಿದೆ.<br>3) ಸದರಿ ಪ್ರಕರಣದ ಕುರಿತು ವಿಚಾರಣಾಧಿಕಾರಿಗಳು ವಿಚಾರಣೆ ನಡೆಸಿ ದಿನಾಂಕ:18-09-2020 ಸದರಿ ಪ್ರಕರಣದಲ್ಲಿರುವ ಆರೋಪಗಳು ರುಜುವಾತಾಗಿರುವುದೆಂದು ನಿರ್ಣಯಿಸಿ ವಿಚಾರಣಾ ವರದಿ ಸಲ್ಲಿಸಿರುತ್ತಾರೆ. ಈ ಕುರಿತು ಸದರಿಯವರಿಗೆ ಎರಡನೇ ಕಾರಣ ಕೇಳುವ ನೋಟೀಸ್ ನೀಡಲಾಗಿದೆ.<br>4) ಸದರಿಯವರು ಎರಡನೇ ಕಾರಣ ಕೇಳುವ ನೋಟೀಸ್‌ಗೆ ಲಿಖಿತ ಸಮಜಾಯಿಷಿಯನ್ನು ಸಲ್ಲಿಸಿರುತ್ತಾರೆ. ಸದರಿ ಪ್ರಕರಣದ ಕುರಿತು ಮುಂದಿನ ಕ್ರಮ ಕೈಗೊಳ್ಳುವ ಹಂತದಲ್ಲಿದೆ. |
| 3 | ಜಿಲ್ಲಾ ನೋಂದಣಿ ಕಛೇರಿ, ಬಳ್ಳಾರಿ | ಶ್ರೀ ಚಂದ್ರಕಾಂತ್ ಮಜ್ಜಗಿ ಹಿರಿಯ ಉಪನೋಂದಣಾಧಿಕಾರಿ | ಉಪನೋಂದಣಿ ಕಛೇರಿ, ಕುರುಗೋಡು | ಉಪನೋಂದಣಿ ಕಛೇರಿ, ಕಂಪ್ಲಿ | ಕುರುಗೋಡು ಉಪನೋಂದಣಿ ಕಛೇರಿಯಲ್ಲಿ ಬಳ್ಳಾರಿ ಗ್ರಾಮದ ಸರ್ವೆ ನಂ.639/ಎ1ಇ1ಬಿ2 ರಲ್ಲಿನ 1.50 ಎಕ್ಕರೆ ಸ್ವತ್ತಿಗೆ ಸಂಬಂಧಿಸಿದಂತೆ ದಿನಾಂಕ:17-08-2009 ರಲ್ಲಿ ಶ್ರೀ ಶಿವಾನಂದ ಯು., ರವರಿಗೆ ಬರೆದುಕೊಂಡಿರುವ ಖೊಟ್ಟಿ ಸಾಮಾನ್ಯ ಅಧಿಕಾರ ಪತ್ರವನ್ನು ಹಾಗೂ ದಿನಾಂಕ:30-07-2012 ರಂದು ನೋಟರೈಜಡ್ ಆಗಿರುವ ಸದರಿ ಸಾಮಾನ್ಯ ಅಧಿಕಾರ ಪತ್ರವನ್ನು ಶ್ರೀ ಶಿವಾನಂದ ಯು, ರವರು ಶ್ರೀ ಆರ್.ವಿ. ಕೇಶವರೆಡ್ಡಿ ಬಿನ್ ಆರ್.ವಿ.ಪಂಪಾರೆಡ್ಡಿ ಇವರಿಗೆ ಕ್ರಯಪತ್ರ |

| | | | | | |
|---|---|---|---|---|---|
| | | | | | ಸಂಖ್ಯೆ:3315/2019-20 ದಿನಾಂಕ: 13-06-2019 ರಲ್ಲಿ ಕುರುಗೋಡು ಉಪನೋಂದಣಿ ಕಛೇರಿಯಲ್ಲಿ ನೋಂದಾಯಿಸಿ ಮಾರಾಟ ಮಾಡಿರುತ್ತಾರೆ.<br>1. ಈ ಹಿನ್ನೆಲೆಯಲ್ಲಿ ಸದರಿಯವರಿಗೆ ದಿನಾಂಕ: 23-12-2019ರಲ್ಲಿ ಅಮಾನತ್ತುಗೊಳಿಸಲಾಗಿತ್ತು. ನಂತರ ಸದರಿಯವರು ಸದರಿ ಅಮಾನತ್ತಿನ ಆದೇಶಕ್ಕೆ ಮಾನ್ಯ ಕರ್ನಾಟಕ ಆಡಳಿತ ನ್ಯಾಯಮಂಡಳಿ ಅರ್ಜಿ ಸಂಖ್ಯೆ:7661/2019 ರಲ್ಲಿ ತಡೆಯಾಜ್ಞೆ ಪಡೆದಿರುತ್ತಾರೆ.<br>2. ಸದರಿಯವರ ವಿರುದ್ಧ ದಿನಾಂಕ:30-01-2021 ರಲ್ಲಿ ದೋಷಾರೋಪಣ ಪಟ್ಟಿ ಜಾರಿಗೊಳಿಸಲಾಗಿದೆ.<br>3. ಸದರಿ ಪ್ರಕರಣದ ಕುರಿತು ದಿನಾಂಕ: 19-04-2021 ರಲ್ಲಿ ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸಲಾಗಿದೆ. ಸದರಿ ಪ್ರಕರಣವು ಇಲಾಖಾ ವಿಚಾರಣಾ ಹಂತದಲ್ಲಿ ಬಾಕಿ ಇದೆ. |
| 3 | ಜಿಲ್ಲಾ ನೋಂದಣಿ ಕಛೇರಿ, ರಾಜಾಜಿನಗರ | ಶ್ರೀ ಸಲೀಂ ಮೋಹಿಯುದ್ದೀನ್, ಉಪನೋಂದಣಾಧಿಕಾರಿ ಮತ್ತು ಶ್ರೀಮತಿ ಎ.ಜ್ಯೋತಿ, ದ್ವಿತೀಯ ದರ್ಜೆ ಸಹಾಯಕರು | ಉಪನೋಂದಣಿ ಕಛೇರಿ, ವಿಜಯನಗರ | ಉಪನೋಂದಣಿ ಕಛೇರಿ, ಕೋಲಾರು ಮತ್ತು ಉಪನೋಂದಣಿ ಕಛೇರಿ, ಬನಶಂಕರಿ | ಸದರಿ ಅಧಿಕಾರಿ/ನೌಕರರುಗಳು ವಿಜಯನಗರ ಉಪನೋಂದಣಿ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ದಿನಾಂಕ: 09-10-2020 ರಂದು ಶ್ರೀ ಹೆಚ್.ಆರ್.ನಾಗರಾಜ್ s/o ಹೆಚ್.ಬಿ.ರಾಜೇಂದ್ರ ಎಂಬುವರು ಸ್ವತ್ತಿನ ಸಂಖ್ಯೆ:1573 (ಹಳೆಯ), 19 (ಹೊಸ), 2ನೇ ಕ್ರಾಸ್, ನಾಗಪ್ಪ ಬ್ಲಾಕ್, ಲಕ್ಷ್ಮೀ ನಾರಾಯಣಪುರ, ಬೆಂಗಳೂರು ಸ್ವತ್ತಿನಲ್ಲಿರುವ ಮೊದಲನೇ ಮಹಡಿಯ ಕಟ್ಟಡಕ್ಕೆ ಸಂಬಂಧಿಸಿದಂತೆ ಸಿದ್ಧಪಡಿಸಿದ Memorandum of Lease Deed ದಸ್ತಾವೇಜನ್ನು ನೋಂದಣಿಗೆ ಹಾಜರು ಪಡಿಸುವುದಾಗಿ ಸ್ವತ್ತಿನ ಮಾಲೀಕರಾದ ಶ್ರೀಮತಿ ಪ್ರಗತಿ ರವರಿಗೆ ತಿಳಿಸಿ, ಸದರಿ Memorandum of Lease Deed ನ್ನು ಉಪ ನೋಂದಣಾಧಿಕಾರಿಗಳಿಗೆ ಸಂಜೆ 5.00 ಗಂಟೆಗೆ ಸಲ್ಲಿಸಿದ್ದು, ನಂತರ ಸದರಿಯವರು ಮೇಲಿನ ಸ್ವತ್ತಿಗೆ ಸಂಬಂಧಿಸಿದ ಕ್ರಯ ಪತ್ರ ಸಂಖ್ಯೆ: 3588/20-21 ನೋಂದಾಯಿಸಿ ಕರ್ನಾಟಕ ನೋಂದಣಿ ನಿಯಮಾವಳಿ 1965ರ ನಿಯಮ 41ನ್ನು ಮತ್ತು 103ನ್ನು ಉಲ್ಲಂಘಿಸಿರುವುದು ಕಂಡುಬಂದಿರುತ್ತದೆ.<br>1. ಈ ಹಿನ್ನೆಲೆಯಲ್ಲಿ ಸದರಿ ಪ್ರಕರಣದಲ್ಲಿ ಪ್ರಭಾರ ಉಪ ನೋಂದಣಾಧಿಕಾರಿಯಾಗಿ ದಸ್ತಾವೇಜನ್ನು ನೋಂದಾಯಿಸಿರುವ |

| | | | | | |
|---|---|---|---|---|---|
| | | | | | ಇವರನ್ನು ಶ್ರೀಮತಿ ಎ.ಜ್ಯೋತಿ, ದ್ವಿತೀಯ ದರ್ಜೆ ಸಹಾಯಕರನ್ನು ದಿನಾಂಕ:21-12-2020ರಂದು ಅಮಾನತ್ತುಗೊಳಿಸಲಾಗಿದೆ.<br>2. ಸದರಿ ಪ್ರಕರಣದಲ್ಲಿ ಶಾಮೀಲಾದ ಉಪ ನೋಂದಣಾಧಿಕಾರಿ ಹಾಗೂ ದ್ವಿತೀಯ ದರ್ಜೆ ಸಹಾಯಕರು ಇವರುಗಳ ವಿರುದ್ಧ ದಿನಾಂಕ: 19-04-2021ರಲ್ಲಿ ದೋಷಾರೋಪಣ ಪಟ್ಟಿ ಜಾರಿಗೊಳಿಸಲಾಗಿದೆ.<br>3. ಸದರಿ ಪ್ರಕರಣದ ಕುರಿತು ದಿನಾಂಕ: 05-07-2021 ರಲ್ಲಿ ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸಲಾಗಿದೆ. ಸದರಿ ಪ್ರಕರಣವು ಇಲಾಖಾ ವಿಚಾರಣಾ ಹಂತದಲ್ಲಿ ಬಾಕಿ ಇದೆ. |

2. <u>ದಸ್ತಾವೇಜು ನೋಂದಣಿಯಲ್ಲಿ ದಾಖಲೆ ತಿರುಚುವ ಪ್ರಕರಣದ ವಿವರ:</u>

- ಉಪ ನೋಂದಣಿ ಕಛೇರಿಗಳಲ್ಲಿ ನೋಂದಾಯಿಸಿರುವ ದಸ್ತಾವೇಜುಗಳ ದತ್ತಾಂಶಗಳಲ್ಲಿ ತಿದ್ದುಪಡಿಗಳು ಮಾಡಿರುವ ಬಗ್ಗೆ ಈ ಕೆಳಕಂಡಂತೆ ತಿಳಿಸಿರುವ ಎಲ್ಲಾ ಪ್ರಕರಣಗಳಿಗೆ ಸಂಬಂಧಿಸಿದಂತೆ ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಗಳನ್ನು ನೇಮಿಸಲಾಗಿದೆ.
- ಕಳೆದ ಮೂರು ವರ್ಷಗಳಲ್ಲಿ ದಾಖಲೆ ತಿರುಚುವ ಪ್ರಕರಣದಲ್ಲಿ 11 ಉಪ ನೋಂದಣಾಧಿಕಾರಿಗಳ ಮೇಲೆ ಕ್ರಮ ಕೈಗೊಳ್ಳಲಾಗಿದೆ.

| ಕ್ರ. ಸಂ | ಸದರಿ ಪ್ರಕರಣ ನಡೆದ ಜಿಲ್ಲಾ ವ್ಯಾಪ್ತಿ | ಉಪನೋಂದಣಾಧಿಕಾರಿಗಳು/ ನೌಕರರ ಹೆಸರು | ಪ್ರಕರಣ ನಡೆದ ಕಛೇರಿ ಹೆಸರು | ಹಾಲಿ ಕಾರ್ಯನಿರ್ವಹಿಸುತ್ತಿರುವ ಕಛೇರಿ ಹೆಸರು | ಪ್ರಕರಣದ ವಿವರ |
|---|---|---|---|---|---|
| 1 | 2 | 3 | 4 | 5 | 6 |
| 1. | ಜಿಲ್ಲಾ ನೋಂದಣಿ ಕಛೇರಿ, ರಾಜಾಜಿನಗರ | ಶ್ರೀ ಮಧುಕುಮಾರ್, ಹಿರಿಯ ಉಪನೋಂದಣಾಧಿಕಾರಿ | ಉಪನೋಂದಣಿ ಕಛೇರಿ ದಾಸನಪುರ | ಹಾಲಿ ನಿವೃತ್ತ | ಸದರಿ ಉಪ ನೋಂದಣಾಧಿಕಾರಿಗಳು ದಾಸನಪುರ ಉಪ ನೋಂದಣಿ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಗ್ರಾಮಪಂಚಾಯಿತಿ ವ್ಯಾಪ್ತಿಯ ದಸ್ತಾವೇಜುಗಳ ನೋಂದಣಿಯಲ್ಲಿ ಸರ್ಕಾರದ ಸುತ್ತೋಲೆ ಸಂಖ್ಯೆ:ಕಂಇ 6 ಮುನೋಮು 2013 ದಿನಾಂಕ:18-07-2014ರಂತೆ ಕಾವೇರಿ ತಂತ್ರಾಂಶ ಮತ್ತು ಗ್ರಾಮ ಪಂಚಾಯಿತಿ ವ್ಯಾಪ್ತಿಯ ಸ್ವತ್ತುಗಳಿಗೆ ಇರುವ ಇ-ಸ್ವತ್ತು ತಂತ್ರಾಂಶದಿಂದ ಮಾಹಿತಿ ಪಡೆಯದೇ ನೋಂದಾಯಿಸಿ ಸದರಿ ಸರ್ಕಾರದ ಸುತ್ತೋಲೆಯನ್ನು ಉಲ್ಲಂಘಿಸಿರುವುದು ಸ್ಪಷ್ಟವಾಗಿ ಕಂಡುಬಂದಿರುತ್ತದೆ. ಸದರಿ ಅನಧಿಕೃತ ತಿದ್ದುಪಡಿಗಳನ್ನು "KAVERI" ಹಾಗೂ "E-SWATHU" ತಂತ್ರಾಂಶಗಳ ಸಂಯೋಜನೆಯನ್ನು ತಪ್ಪಿಸಿ ದಸ್ತಾವೇಜುಗಳನ್ನು ನೋಂದಾಯಿಸಿರುವುದು ಕಂಡಬಂದಿರುತ್ತದೆ.<br>1) ಈ ಸಂಬಂಧ ಸದರಿಯವರಿಗೆ ದೋಷಾರೋಪಣ ಪಟ್ಟಿ ಜಾರಿಗೊಳಿಸಲಾಗಿದೆ.<br>2) ಸದರಿ ಪ್ರಕರಣದ ಕುರಿತು ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸಲಾಗಿದೆ. ಸದರಿ ಪ್ರಕರಣವು ಇಲಾಖಾ ವಿಚಾರಣಾ ಹಂತದಲ್ಲಿ ಬಾಕಿಯಿದೆ. |

| | | | | | |
|---|---|---|---|---|---|
| 2. | ಜಿಲ್ಲಾ ನೋಂದಣಿ ಕಛೇರಿ ರಾಜಾಜಿನಗರ | ಶ್ರೀ ಅರವಿಂದ್, ಹಿರಿಯ ಉಪನೋಂದಣಾಧಿಕಾರಿ | ಉಪನೋಂದಣಿ ಕಛೇರಿ ಲಗ್ಗೆರೆ | ಉಪನೋಂದಣಿ ಕಛೇರಿ ದೇವನಹಳ್ಳಿ | ಸದರಿ ಉಪ ನೋಂದಣಾಧಿಕಾರಿಗಳು ಲಗ್ಗೆರೆ ಉಪ ನೋಂದಣಿ ಕಛೇರಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಗ್ರಾಮ ಪಂಚಾಯ್ತಿ ವ್ಯಾಪ್ತಿಯ ದಸ್ತಾವೇಜುಗಳ ನೋಂದಣಿಯಲ್ಲಿ ಸರ್ಕಾರದ ಸುತ್ತೋಲೆ ಸಂಖ್ಯೆ:ಕಂಇ 6 ಮುನೋಮು 2013 ದಿನಾಂಕ:18–07–2014ರಂತೆ ಕಾವೇರಿ ತಂತ್ರಾಂಶ ಮತ್ತು ಗ್ರಾಮ ಪಂಚಾಯಿತಿ ವ್ಯಾಪ್ತಿಯ ಸ್ವತ್ತುಗಳಿಗೆ ಇರುವ ಇ–ಸ್ವತ್ತು ತಂತ್ರಾಂಶದಿಂದ ಮಾಹಿತಿ ಪಡೆಯದೇ ನೋಂದಾಯಿಸಿ ಸದರಿ ಸರ್ಕಾರದ ಸುತ್ತೋಲೆಯನ್ನು ಉಲ್ಲಂಘಿಸಿರುವುದು ಸ್ಪಷ್ಟವಾಗಿ ಕಂಡುಬಂದಿರುತ್ತದೆ. ಸದರಿ ಅನಧಿಕೃತ ತಿದ್ದುಪಡಿಗಳನ್ನು "KAVERI" ಹಾಗೂ "E-SWATHU" ತಂತ್ರಾಂಶಗಳ ಸಂಯೋಜನೆಯನ್ನು ತಪ್ಪಿಸಿ ದಸ್ತಾವೇಜುಗಳನ್ನು ನೋಂದಾಯಿಸಿರುವುದು ಕಂಡಬಂದಿರುತ್ತದೆ.<br>1) ಈ ಸಂಬಂಧ ಸದರಿಯವರಿಗೆ ದೋಷಾರೋಪಣ ಪಟ್ಟಿ ಜಾರಿಗೊಳಿಸಲಾಗಿದೆ.<br>2) ಸದರಿ ಪ್ರಕರಣದ ಕುರಿತು ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸಲಾಗಿದೆ. ಸದರಿ ಪ್ರಕರಣವು ಇಲಾಖಾ ವಿಚಾರಣಾ ಹಂತದಲ್ಲಿ ಬಾಕಿಯಿದೆ. |
| 3. | ಜಿಲ್ಲಾ ನೋಂದಣಿ ಕಛೇರಿ ರಾಜಾಜಿನಗರ | ಶ್ರೀಮತಿ ಲಲಿತಾ ಅಮೃತೇಶ್, ಹಿರಿಯ ಉಪನೋಂದಣಾಧಿಕಾರಿ | ಉಪನೋಂದಣಿ ಕಛೇರಿ, ಮಾದನಾಯಕನಹಳ್ಳಿ | ಉಪನೋಂದಣಿ ಕಛೇರಿ, ರಾಜರಾಜೇಶ್ವರಿನಗರ | ಸದರಿ ಉಪ ನೋಂದಣಾಧಿಕಾರಿಗಳು ಮಾದನಾಯಕನಹಳ್ಳಿ ಉಪ ನೋಂದಣಿ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಗ್ರಾಮ ಪಂಚಾಯ್ತಿ ವ್ಯಾಪ್ತಿಯ ದಸ್ತಾವೇಜುಗಳ ನೋಂದಣಿಯಲ್ಲಿ ಸರ್ಕಾರದ ಸುತ್ತೋಲೆ ಸಂಖ್ಯೆ: ಕಂಇ 6 ಮುನೋಮು 2013 ದಿನಾಂಕ:18–07–2014ರಂತೆ ಕಾವೇರಿ ತಂತ್ರಾಂಶ ಮತ್ತು ಗ್ರಾಮ ಪಂಚಾಯಿತಿ ವ್ಯಾಪ್ತಿಯ ಸ್ವತ್ತುಗಳಿಗೆ ಇರುವ ಇ–ಸ್ವತ್ತು ತಂತ್ರಾಂಶದಿಂದ ಮಾಹಿತಿ ಪಡೆಯದೇ ನೋಂದಾಯಿಸಿ ಸದರಿ ಸರ್ಕಾರದ ಸುತ್ತೋಲೆಯನ್ನು ಉಲ್ಲಂಘಿಸಿರುವುದು ಸ್ಪಷ್ಟವಾಗಿ ಕಂಡುಬಂದಿರುತ್ತದೆ. ಸದರಿ ಅನಧಿಕೃತ ತಿದ್ದುಪಡಿಗಳನ್ನು "KAVERI" ಹಾಗೂ "E-SWATHU" ತಂತ್ರಾಂಶಗಳ ಸಂಯೋಜನೆಯನ್ನು ತಪ್ಪಿಸಿ ದಸ್ತಾವೇಜುಗಳನ್ನು ನೋಂದಾಯಿಸಿರುವುದು ಕಂಡಬಂದಿರುತ್ತದೆ. |

| | | | | | |
|---|---|---|---|---|---|
| | | | | | 1) ಈ ಸಂಬಂಧ ಸದರಿಯವರಿಗೆ ದೋಷಾರೋಪಣ ಪಟ್ಟಿ ಜಾರಿಗೊಳಿಸಲಾಗಿದೆ.<br>2) ಸದರಿ ಪ್ರಕರಣದ ಕುರಿತು ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸಲಾಗಿದೆ. ಸದರಿ ಪ್ರಕರಣವು ಇಲಾಖಾ ವಿಚಾರಣಾ ಹಂತದಲ್ಲಿ ಬಾಕಿಯಿದೆ. |
| 4. | ಜಿಲ್ಲಾ ನೋಂದಣಿ ಕಛೇರಿ ರಾಜಾಜಿನಗರ | ಶ್ರೀ ಕೆ.ಆರ್.ನಾಗರಾಜ, ಉಪನೋಂದಣಾಧಿಕಾರಿ | ಉಪನೋಂದಣಿ ಕಛೇರಿ ಪೀಣ್ಯ | ಉಪನೋಂದಣಿ ಕಛೇರಿ ಹೆಬ್ಬಾಳ | ಸದರಿ ಉಪನೋಂದಣಾಧಿಕಾರಿಗಳು ಪೀಣ್ಯ ಉಪ ನೋಂದಣಿ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಗ್ರಾಮಪಂಚಾಯ್ತಿ ವ್ಯಾಪ್ತಿಯ ದಸ್ತಾವೇಜುಗಳ ನೋಂದಣಿಯಲ್ಲಿ ಸರ್ಕಾರದ ಸುತ್ತೋಲೆ ಸಂಖ್ಯೆ:ಕಂಇ 6 ಮುನೋಮು 2013 ದಿನಾಂಕ:18-07-2014ರಂತೆ ಕಾವೇರಿ ತಂತ್ರಾಂಶ ಮತ್ತು ಗ್ರಾಮ ಪಂಚಾಯಿತಿ ವ್ಯಾಪ್ತಿಯ ಸ್ವತ್ತುಗಳಿಗೆ ಇರುವ ಇ-ಸ್ವತ್ತು ತಂತ್ರಾಂಶದಿಂದ ಮಾಹಿತಿ ಪಡೆಯದೇ ನೋಂದಾಯಿಸಿ ಸದರಿ ಸರ್ಕಾರದ ಸುತ್ತೋಲೆಯನ್ನು ಉಲ್ಲಂಘಿಸಿರುವುದು ಸ್ಪಷ್ಟವಾಗಿ ಕಂಡುಬಂದಿರುತ್ತದೆ. ಸದರಿ ಅನಧಿಕೃತ ತಿದ್ದುಪಡಿಗಳನ್ನು "KAVERI" ಹಾಗೂ "E-SWATHU" ತಂತ್ರಾಂಶಗಳ ಸಂಯೋಜನೆಯನ್ನು ತಪ್ಪಿಸಿ ದಸ್ತಾವೇಜುಗಳನ್ನು ನೋಂದಾಯಿಸಿರುವುದು ಕಂಡಬಂದಿರುತ್ತದೆ.<br>1) ಈ ಸಂಬಂಧ ಸದರಿಯವರಿಗೆ ದೋಷಾರೋಪಣ ಪಟ್ಟಿ ಜಾರಿಗೊಳಿಸಲಾಗಿದೆ.<br>2) ಸದರಿ ಪ್ರಕರಣದ ಕುರಿತು ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸಲಾಗಿದೆ. ಸದರಿ ಪ್ರಕರಣವು ಇಲಾಖಾ ವಿಚಾರಣಾ ಹಂತದಲ್ಲಿ ಬಾಕಿಯಿದೆ. |
| 5. | ಜಿಲ್ಲಾ ನೋಂದಣಿ ಕಛೇರಿ ಬಸನವಗುಡಿ | ಶ್ರೀ ಶಿವಪುತ್ರ ತಂಗಾ, ಹಿರಿಯ ಉಪನೋಂದಣಾಧಿಕಾರಿ | ಉಪನೋಂದಣಿ ಕಛೇರಿ ಆನೇಕಲ್ | ಉಪನೋಂದಣಿ ಕಛೇರಿ ಆನೇಕಲ್ | ಸದರಿಯವರು ಆನೇಕಲ್ ಉಪನೋಂದಣಿ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಸದರಿ ಕಛೇರಿಯ ದಸ್ತಾವೇಜುಗಳಲ್ಲಿ ತಿದ್ದುಪಡಿಯನ್ನು ಭಾರತೀಯ ನೋಂದಣಿ ಕಾಯ್ದೆ 1908ರ ಕಲಂ 68(2)ರಲ್ಲಿ ಸಂಬಂದಪಟ್ಟ ಜಿಲ್ಲಾ ನೋಂದಣಾಧಿಕಾರಿಗಳ ಆದೇಶವಿಲ್ಲದೇ State Data Center ನ Data Base ನಲ್ಲಿ ಅನಧಿಕೃತವಾಗಿ ತಿದ್ದುಪಡಿ/ಮಾರ್ಪಾಡು ಮಾಡಿರುವ ಪ್ರಕರಣದ ಕುರಿತು. |

| | | | | | |
|---|---|---|---|---|---|
| | | | | | 1) ಈ ಸಂಬಂಧ ಸದರಿಯವರಿಗೆ ದೋಷಾರೋಪಣ ಪಟ್ಟಿ ಜಾರಿಗೊಳಿಸಲಾಗಿದೆ.<br>2) ಸದರಿ ಪ್ರಕರಣದ ಕುರಿತು ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸಲಾಗಿದೆ. ಸದರಿ ಪ್ರಕರಣವು ಇಲಾಖಾ ವಿಚಾರಣಾ ಹಂತದಲ್ಲಿ ಬಾಕಿಯಿದೆ. |
| 6. | ಜಿಲ್ಲಾ ನೋಂದಣಿ ಕಛೇರಿ ಗಾಂಧಿನಗರ | ಶ್ರೀ ಭಾಸ್ಕರ್ ಚೌರ, ಉಪನೋಂದಣಾಧಿಕಾರಿ, | ಉಪನೋಂದಣಿ ಕಛೇರಿ ಜಾಲ | ಉಪನೋಂದಣಿ ಕಛೇರಿ ಬಿ.ಟಿ.ಎಂ ಲೇಔಟ್ | ಸದರಿಯವರು ಜಾಲ ಉಪನೋಂದಣಿ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಸದರಿ ಕಛೇರಿಯ ದಸ್ತಾವೇಜುಗಳಲ್ಲಿ ತಿದ್ದುಪಡಿಯನ್ನು ಭಾರತೀಯ ನೋಂದಣಿ ಕಾಯ್ದೆ 1908ರ ಕಲಂ 68(2)ರಲ್ಲಿ ಸಂಬಂದಪಟ್ಟ ಜಿಲ್ಲಾ ನೋಂದಣಾಧಿಕಾರಿಗಳ ಆದೇಶವಿಲ್ಲದೇ State Data Center ನ Data Base ನಲ್ಲಿ ಅನಧಿಕೃತವಾಗಿ ತಿದ್ದುಪಡಿ/ಮಾರ್ಪಾಡು ಮಾಡಿರುವ ಪ್ರಕರಣದ ಕುರಿತು.<br>1) ಈ ಸಂಬಂಧ ಸದರಿಯವರಿಗೆ ದೋಷಾರೋಪಣ ಪಟ್ಟಿ ಜಾರಿಗೊಳಿಸಲಾಗಿದೆ.<br>2) ಸದರಿ ಪ್ರಕರಣದ ಕುರಿತು ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸಲಾಗಿದೆ. ಸದರಿ ಪ್ರಕರಣವು ಇಲಾಖಾ ವಿಚಾರಣಾ ಹಂತದಲ್ಲಿ ಬಾಕಿಯಿದೆ. |
| 7. | ಜಿಲ್ಲಾ ನೋಂದಣಿ ಕಛೇರಿ ಗಾಂಧಿನಗರ | ಶ್ರೀ ಬಿ.ಪ್ರಶಾಂತ್, ಪ್ರಥಮ ದರ್ಜೆ ಸಹಾಯಕರು, | ಉಪನೋಂದಣಿ ಕಛೇರಿ ಬ್ಯಾಟರಾಯನಪುರ | ಉಪನೋಂದಣಿ ಕಛೇರಿ ಗಂಗಾನಗರ | ಸದರಿಯವರು ಬ್ಯಾಟರಾಯನಪುರ ಉಪನೋಂದಣಿ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಸದರಿ ಕಛೇರಿಯ ದಸ್ತಾವೇಜುಗಳಲ್ಲಿ ತಿದ್ದುಪಡಿಯನ್ನು ಭಾರತೀಯ ನೋಂದಣಿ ಕಾಯ್ದೆ 1908ರ ಕಲಂ 68(2)ರಲ್ಲಿ ಸಂಬಂದಪಟ್ಟ ಜಿಲ್ಲಾ ನೋಂದಣಾಧಿಕಾರಿಗಳ ಆದೇಶವಿಲ್ಲದೇ State Data Center ನ Data Base ನಲ್ಲಿ ಅನಧಿಕೃತವಾಗಿ ತಿದ್ದುಪಡಿ/ಮಾರ್ಪಾಡು ಮಾಡಿರುವ ಪ್ರಕರಣದ ಕುರಿತು.<br>1) ಈ ಸಂಬಂಧ ಸದರಿಯವರಿಗೆ ದೋಷಾರೋಪಣ ಪಟ್ಟಿ ಜಾರಿಗೊಳಿಸಲಾಗಿದೆ.<br>2) ಸದರಿ ಪ್ರಕರಣದ ಕುರಿತು ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸಲಾಗಿದೆ. ಸದರಿ ಪ್ರಕರಣವು ಇಲಾಖಾ ವಿಚಾರಣಾ ಹಂತದಲ್ಲಿ ಬಾಕಿಯಿದೆ. |

| | | | | |
|---|---|---|---|---|
| 8. ಜಿಲ್ಲಾ ನೋಂದಣಿ ಕಛೇರಿ ಜಯನಗರ | ಶ್ರೀ ವೈ.ಹೆಚ್.ಸರೋಜ ಉಪನೋಂದಣಾಧಿಕಾರಿ, | ಉಪನೋಂದಣಿ ಕಛೇರಿ ತಾವರೆಕೆರೆ | ಉಪನೋಂದಣಿ ಕಛೇರಿ ಶಾಂತಿನಗರ | ಸದರಿಯವರು ತಾವರೆಕೆರೆ ಉಪನೋಂದಣಿ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಸದರಿ ಕಛೇರಿಯ ದಸ್ತಾವೇಜುಗಳಲ್ಲಿ ತಿದ್ದುಪಡಿಯನ್ನು ಭಾರತೀಯ ನೋಂದಣಿ ಕಾಯ್ದೆ 1908ರ ಕಲಂ 68(2)ರಲ್ಲಿ ಸಂಬಂದಪಟ್ಟ ಜಿಲ್ಲಾ ನೋಂದಣಾಧಿಕಾರಿಗಳ ಆದೇಶವಿಲ್ಲದೇ State Data Center ನ Data Base ನಲ್ಲಿ ಅನಧಿಕೃತವಾಗಿ ತಿದ್ದುಪಡಿ/ಮಾರ್ಪಾಡು ಮಾಡಿರುವ ಪ್ರಕರಣದ ಕುರಿತು.<br>1) ಈ ಸಂಬಂಧ ಸದರಿಯವರಿಗೆ ದೋಷಾರೋಪಣ ಪಟ್ಟಿ ಜಾರಿಗೊಳಿಸಲಾಗಿದೆ.<br>2) ಸದರಿ ಪ್ರಕರಣದ ಕುರಿತು ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸಲಾಗಿದೆ. ಸದರಿ ಪ್ರಕರಣವು ಇಲಾಖಾ ವಿಚಾರಣಾ ಹಂತದಲ್ಲಿ ಬಾಕಿಯಿದೆ. |
| 9. ಜಿಲ್ಲಾ ನೋಂದಣಿ ಕಛೇರಿ ತುಮಕೂರು | ಶ್ರೀಮತಿ ಎಸ್.ಎಂ. ಪ್ರಗತಿ, ಉಪನೋಂದಣಾಧಿಕಾರಿ, | ಉಪನೋಂದಣಿ ಕಛೇರಿ ತುಮಕೂರು | ಉಪನೋಂದಣಿ ಕಛೇರಿ ತುಮಕೂರು | ಸದರಿಯವರು ತುಮಕೂರು ಉಪನೋಂದಣಿ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಸದರಿ ಕಛೇರಿಯ ದಸ್ತಾವೇಜುಗಳಲ್ಲಿ ತಿದ್ದುಪಡಿಯನ್ನು ಭಾರತೀಯ ನೋಂದಣಿ ಕಾಯ್ದೆ 1908ರ ಕಲಂ 68(2)ರಲ್ಲಿ ಸಂಬಂದಪಟ್ಟ ಜಿಲ್ಲಾ ನೋಂದಣಾಧಿಕಾರಿಗಳ ಆದೇಶವಿಲ್ಲದೇ State Data Center ನ Data Base ನಲ್ಲಿ ಅನಧಿಕೃತವಾಗಿ ತಿದ್ದುಪಡಿ/ಮಾರ್ಪಾಡು ಮಾಡಿರುವ ಪ್ರಕರಣದ ಕುರಿತು.<br>1) ಈ ಸಂಬಂಧ ಸದರಿಯವರಿಗೆ ದೋಷಾರೋಪಣ ಪಟ್ಟಿ ಜಾರಿಗೊಳಿಸಲಾಗಿದೆ.<br>2) ಸದರಿ ಪ್ರಕರಣದ ಕುರಿತು ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸಲಾಗಿದೆ. ಸದರಿ ಪ್ರಕರಣವು ಇಲಾಖಾ ವಿಚಾರಣಾ ಹಂತದಲ್ಲಿ ಬಾಕಿಯಿದೆ. |

| | | | | | |
|---|---|---|---|---|---|
| 10 | ಜಿಲ್ಲಾ ನೋಂದಣಿ ಕಛೇರಿ ಬಾಗಲಕೋಟೆ | ಶ್ರೀ ಎಸ್.ಆರ್.ಕಟ್ಟೀಮನಿ, ಹಿರಿಯ ಉಪನೋಂದಣಾಧಿಕಾರಿ, | ಉಪನೋಂದಣಿ ಕಛೇರಿ ಮುಧೋಳ್ | ಉಪನೋಂದಣಿ ಕಛೇರಿ ದೊಡ್ಡಬಳ್ಳಾಪುರ | ಸದರಿಯವರು ಮುಧೋಳ್ ಉಪನೋಂದಣಿ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಸದರಿ ಕಛೇರಿಯ ದಸ್ತಾವೇಜುಗಳಲ್ಲಿ ತಿದ್ದುಪಡಿಯನ್ನು ಭಾರತೀಯ ನೋಂದಣಿ ಕಾಯ್ದೆ 1908ರ ಕಲಂ 68(2)ರಲ್ಲಿ ಸಂಬಂದಪಟ್ಟ ಜಿಲ್ಲಾ ನೋಂದಣಾಧಿಕಾರಿಗಳ ಆದೇಶವಿಲ್ಲದೇ State Data Center ನ Data Base ನಲ್ಲಿ ಅನಧಿಕೃತವಾಗಿ ತಿದ್ದುಪಡಿ/ಮಾರ್ಪಾಡು ಮಾಡಿರುವ ಪ್ರಕರಣದ ಕುರಿತು.<br>1) ಈ ಸಂಬಂಧ ಸದರಿಯವರಿಗೆ ದೋಷಾರೋಪಣ ಪಟ್ಟಿ ಜಾರಿಗೊಳಿಸಲಾಗಿದೆ.<br>2) ಸದರಿ ಪ್ರಕರಣದ ಕುರಿತು ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸಲಾಗಿದೆ. ಸದರಿ ಪ್ರಕರಣವು ಇಲಾಖಾ ವಿಚಾರಣಾ ಹಂತದಲ್ಲಿ ಬಾಕಿಯಿದೆ. |
| 11 | ಜಿಲ್ಲಾ ನೋಂದಣಿ ಕಛೇರಿ ಶಿವಮೊಗ್ಗ | ಶ್ರೀ ಜಿ. ಪ್ರಸನ್ನ, ಹಿರಿಯ ಉಪನೋಂದಣಾಧಿಕಾರಿ, | ಉಪನೋಂದಣಿ ಕಛೇರಿ ಶಿವಮೊಗ್ಗ | ಉಪನೋಂದಣಿ ಕಛೇರಿ | ಸದರಿಯವರು ಶಿವಮೊಗ್ಗ ಉಪನೋಂದಣಿ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಸದರಿ ಕಛೇರಿಯ ದಸ್ತಾವೇಜುಗಳಲ್ಲಿ ತಿದ್ದುಪಡಿಯನ್ನು ಭಾರತೀಯ ನೋಂದಣಿ ಕಾಯ್ದೆ 1908ರ ಕಲಂ 68(2)ರಲ್ಲಿ ಸಂಬಂದಪಟ್ಟ ಜಿಲ್ಲಾ ನೋಂದಣಾಧಿಕಾರಿಗಳ ಆದೇಶವಿಲ್ಲದೇ State Data Center ನ Data Base ನಲ್ಲಿ ಅನಧಿಕೃತವಾಗಿ ತಿದ್ದುಪಡಿ/ಮಾರ್ಪಾಡು ಮಾಡಿರುವ ಪ್ರಕರಣದ ಕುರಿತು.<br>1) ಈ ಸಂಬಂಧ ಸದರಿಯವರಿಗೆ ದೋಷಾರೋಪಣ ಪಟ್ಟಿ ಜಾರಿಗೊಳಿಸಲಾಗಿದೆ.<br>2) ಸದರಿ ಪ್ರಕರಣದ ಕುರಿತು ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸಲಾಗಿದೆ. ಸದರಿ ಪ್ರಕರಣವು ಇಲಾಖಾ ವಿಚಾರಣಾ ಹಂತದಲ್ಲಿ ಬಾಕಿಯಿದೆ. |